# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೩ನೇ ವರ್ಷ ೧೨ನೇ ಸಂಚಿಕೆ ಕೊಪ್ಪ ೧೧-೧೧-೧೯೮೪ ಭಾನುವಾರ ಬೆಲೆ ೨೦ ಪೈಸೆ


## ಭದ್ರಾ ಮೇಲ್ದಂಡೆ ವಿರೋಧಿ ಧರಣಿ ನ. ೧೭ಕ್ಕೆ

ಚಿಕ್ಕಮಗಳೂರು: ಭದ್ರಾ ಮೇಲ್ದಂಡೆ ಯೋಜನೆಯನ್ನು ವಿರೋಧಿಸಿ ನ. ೭ರಂದು ಜಿಲ್ಲಾಧಿಕಾರಿ ಕಚೇರಿಯೆದುರು ನಡೆಸಲು ಯೋಜಿಸಲಾಗಿದ್ದ ಧರಣಿಯನ್ನು ನ. ೧೭ರ ಶನಿವಾರ ನಡೆಸಲು ನಿರ್ಧರಿಸಲಾಗಿದೆ. ಧರಣಿ ಅಂದು ಬೆಳಿಗ್ಗೆ ೧೧ ಗಂಟೆಯಿಂದ ನಡೆಯುತ್ತದೆ.

ಜಿಲ್ಲೆಯ ಎಲ್ಲಾ ಕಡೆಗಳಿಂದಲೂ ರೈತರು, ಪ್ರಗತಿಪರರು ಇದರಲ್ಲಿ ಭಾಗವಹಿಸಬೇಕೆಂದು ಯೋಜನೆಯ ವಿರೋಧಿಗಳ ಒಕ್ಕೂಟ ಕರೆ ನೀಡಿದೆ.

**ಕಾಫಿ ಬೆಳೆಗಾರರ ಸಂಘದ ಹೇಳಿಕೆ**

ಯೋಜನೆಯನ್ನು ವಿರೋಧಿಸಿರುವ ಖಾಂಡ್ಯ ಕಾಫಿ ಬೆಳೆಗಾರರ ಸಂಘದ ಅಧ್ಯಕ್ಷ ಉದಯಕುಮಾರ್ ಹೆಗ್ಡೆ ಮತ್ತು ಕಾರ್ಯದರ್ಶಿ ವಿಶ್ವನಾಥ್, ಪಶ್ಚಿಮ ಘಟ್ಟಗಳಲ್ಲಿ ದಟ್ಟ ಹಸಿರಿನ ಕಾಡುಗಳು ಮರೆಯಾಗುತ್ತಿರುವ ಈ ಸಮಯದಲ್ಲಿ ಭದ್ರಾ ಮೇಲ್ದಂಡೆ ಯೋಜನೆಯಿಂದ ಅಳಿದುಳಿದ ಹಸಿರೂ ಮಾಸಿಹೋಗಬಹುದು ಎಂದಿದ್ದಾರೆ.

ಈ ಯೋಜನೆಯಿಂದ ಅಡಿಕೆ, ಕಾಫಿ ತೋಟಗಳ ಮುಳುಗಡೆಯ ಜೊತೆಗೆ ಸಾವಿರಾರು ಎಕರೆ ಅರಣ್ಯ ನಾಶವಾಗಲಿದ್ದು, ಇದರ ಪರಿಣಾಮವಾಗಿ ಹವಾಮಾನದಲ್ಲಿ ತೀವ್ರ ಏರುಪೇರಾಗಲಿದ್ದು, ನದಿಯ ಮೂಲಗಳೂ ಬತ್ತಿಹೋಗುವ ಅಪಾಯವಿರುವುದಲ್ಲದೆ, ಇದರಿಂದ ಮಲೆನಾಡು ಮುಂದೆ ಮರಳುಗಾಡಾಗಬಹುದು ಎಂದು ಅವರು ಎಚ್ಚರಿಸಿದ್ದಾರೆ.

ಮಾಗುಂಡಿಯಿಂದ ಕೆಲವೇ ಕಿ. ಮೀ. ದೂರದಲ್ಲಿ ಇನ್ನೊಂದು ಜಲಾಶಯ ಈಗಾಗಲೇ ಇದೆ. ಈ ಎಲ್ಲ ಸಾಧಕ–ಬಾಧಕಗಳನ್ನೂ ವಿವೇಚಿಸಿ ಈ ಯೋಜನೆಯನ್ನು ಕೈಬಿಡಬೇಕೆಂದು ಅವರು ಒತ್ತಾಯಿಸಿದ್ದಾರೆ.

### ಶಿವಮೊಗ್ಗ ಅಡಿಕೆ ಪೇಟೆ

ತಾರೀಕು: ೭–೧೧–'೮೪

ಸರಕು: ೨೪೬೦ ರಿಂದ ೩೩೪೯

ಬೆಟ್ಟೆ: ೧೨೦೦ ರಿಂದ ೨೦೬೦

ಗೊರಬಲು: ೭೯೯ರಿಂದ ೧೦೭೯

## ಇಂದಿರಾ ನಿಧನಕ್ಕೆ ಎಲ್ಲೆಡೆ ಕಂಬನಿ

ಕೊಪ್ಪ: ದಿ|| ಪ್ರಧಾನಿ ಇಂದಿರಾ ಗಾಂಧಿಯವರ ನಿಧನದ ಬಗ್ಗೆ ಶೋಕ ಸೂಚಕ ಸಭೆಗಳು ನಡೆದ ವರದಿಗಳು ಎಲ್ಲೆಡೆಯಿಂದ ಬರುತ್ತಿವೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಚಿಕ್ಕಮಗಳೂರು ಜಿಲ್ಲಾ ಶಾಖೆ ಕಚೇರಿಯಲ್ಲಿ ನಡೆದ ಸಭೆಯಲ್ಲಿ ಅಗಲಿದ ಪ್ರಧಾನಿಗೆ ಸಂತಾಪ ವ್ಯಕ್ತಪಡಿಸಿ, ಅವರ ಹತ್ಯೆ ಅಮಾನವೀಯ ಕೃತ್ಯವೆಂದು ಉಗ್ರವಾಗಿ ಖಂಡಿಸಲಾಯಿತು.

ಜಾತಿ–ಮತೀಯ ಸಣ್ಣತನ, ಅಧಿಕಾರದ ಹಂಬಲದಿಂದ ಇಂದೂ ದೇಶಾದ್ಯಂತ ಕೊಲೆ, ಲೂಟಿ, ಅತ್ಯಾಚಾರ, ದೌರ್ಜನ್ಯಗಳು ಅಧಿಕಗೊಳ್ಳುತ್ತಾ ಜನಸಾಮಾನ್ಯರು ಸಾವಿನ ದವಡೆಯಲ್ಲಿ ಬದುಕುವಂತಾಗಿದೆ. ಭಾರತೀಯರು ಜಾತಿ ರಹಿತ, ವರ್ಗರಹಿತ, ಸಮಾನತೆಯ ಸಮಾಜ ಸ್ಥಾಪನೆಗಾಗಿ ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ ಎಂದು ದ.ಸಂ.ಸ. ಕರೆ ನೀಡಿದೆ.

ಬಾಳೆಹೊನ್ನೂರಿನಲ್ಲಿ ಎಲ್ಲ ರಾಜಕೀಯ ಪಕ್ಷಗಳವರು, ವಿವಿಧ ಜನವರ್ಗಗಳವರು ಮತ್ತು ಸುತ್ತಮುತ್ತಲ ಹಳ್ಳಿಗಳ ಜನತೆ ಅಪಾರ ಸಂಖ್ಯೆಯಲ್ಲಿ ಸೇರಿ ಅ. ೩೧ರಂದು ಸಂತಾಪ ಸೂಚಕ ಸಭೆ ನಡೆಸಿದರು. ನ. ೩ ರಂದು ಮೌನಾಚರಣೆ ಮತ್ತು ಮೌನ ಮೆರವಣಿಗೆ ನಡೆಯಿತು.

ಗುಡ್ಡೇತೋಟ, ಹಾಲ್ಮತ್ತೂರಿನ ಹುಲುಕೋಡು ಶಾಲೆ, ಸೀತೂರು ವಿನಾಯಕ ರೈತಸಂಘ ಮುಂತಾದೆಡೆಗಳಿಂದಲೂ ಸಂತಾಪ ಸೂಚಕ ಸಭೆಗಳು ನಡೆದ ವರದಿಗಳು ಬಂದಿವೆ.

## ಕೊಪ್ಪ ತಾ|| ಶಾಲಾ ಕ್ರೀಡಾ ಕೂಟ

ಕೊಪ್ಪ: ಇಲ್ಲಿನ ಕ್ರೀಡಾಭಿವೃದ್ಧಿ ಸಮಿತಿಯ ಆಶ್ರಯದಲ್ಲಿ ಮಕ್ಕಳ ದಿನಾಚರಣೆಯಂಗವಾಗಿ ನ. ೧೪ರಂದು ಬೆಳಿಗ್ಗೆ ೯–೩೦ಕ್ಕೆ ತಾ|| ಮಟ್ಟದ ಶಾಲಾ ಮಕ್ಕಳ ಕ್ರೀಡಾ ಸ್ಪರ್ಧೆಗಳು ನಡೆಯುತ್ತಿವೆ. ಶಿಶುವಿಹಾರದಿಂದ ಪ್ರೌಢಶಾಲಾ ಮಕ್ಕಳವರೆಗೆಲ್ಲ ಹಂತಗಳಲ್ಲಿ ಸ್ಪರ್ಧೆಗಳು ನಡೆಯುತ್ತವೆ.

ತಾಲ್ಲೂಕಿನ ಎಲ್ಲಾ ಶಿಶುವಿಹಾರ, ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳು ಹಾಗೂ ಪ್ರೌಢಶಾಲೆಗಳ ಮುಖ್ಯಸ್ಥರು ತಮ್ಮ ಶಾಲೆಗಳ ಮಕ್ಕಳನ್ನು ಈ ಸ್ಪರ್ಧೆಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸಬೇಕಾಗಿ ಸಮಿತಿ ಕೋರಿದೆ.

ಪ್ರೌಢಶಾಲಾ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗಾಗಿ **ರಸ್ತೆ ಓಟದ ಸ್ಪರ್ಧೆ** ನ. ೧೪ರ ಬೆಳಿಗ್ಗೆ ೮ ಗಂಟೆಗೆ ಆರಂಭವಾಗುತ್ತದೆ. ಸ್ಪರ್ಧಿಗಳು ವೈದ್ಯರಿಂದ ಪಡೆದ ಅರ್ಹತಾ ಪತ್ರದೊಂದಿಗೆ ಶಂಕರ್ ಕಂಪೆನಿಯ ಎದುರುಗಡೆ ವ್ಯವಸ್ಥಾಪಕರಲ್ಲಿ ವರದಿ ಮಾಡಿಕೊಳ್ಳಬೇಕು.

ಆಯಾ ಕ್ಷೇತ್ರಮಟ್ಟದಲ್ಲಿ ವಿಜೇತರಾಗಿ ತಾ|| ಮಟ್ಟಕ್ಕೆ ಸ್ಪರ್ಧಿಸುತ್ತಿರುವವರ ಮತ್ತು ಪ್ರೌಢಶಾಲಾ ಸ್ಪರ್ಧಾಳುಗಳ ಪ್ರವೇಶವನ್ನು ತಾ|| ೧೨–೧೧–೮೪ ರೊಳಗಾಗಿ ಹೆಚ್.ಎ.ಗೋಪಾಲ್, ದೈಹಿಕ ಶಿಕ್ಷಣ ಶಿಕ್ಷಕರು, ಕಿರಿಯ ಕಾಲೇಜು, ಕೊಪ್ಪ—ಈ ವಿಳಾಸಕ್ಕೆ ಕಳುಹಿಸಬೇಕು.

## ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನ

ಬೆಂಗಳೂರು: ೧೯೮೪-೮೫ ರ ಸಾಲಿಗೆ ರಾಜ್ಯದ ಅರ್ಹರಾದ ಕಾರ್ಮಿಕರ ಮಕ್ಕಳಿಂದ ವಿದ್ಯಾರ್ಥಿವೇತನದ ಅರ್ಜಿಗಳನ್ನು ಕರೆಯಲಾಗಿದೆ. ಅರ್ಜಿದಾರ ವಿದ್ಯಾರ್ಥಿಗಳು ತಮ್ಮ ಹಿಂದಿನ ಪರೀಕ್ಷೆಯಲ್ಲಿ ಶೇ ೫೦ ಅಂಕ ಪಡೆದಿರಬೇಕು (ಪರಿಶಿಷ್ಟ ಜಾತಿ/ಪಂಗಡಗಳವರಿಗೆ ಶೇ. ೪೦); ಬೇರೆ ಯಾವುದೇ ವಿದ್ಯಾರ್ಥಿ ವೇತನ ಪಡೆದಿರಬಾರದು; ಪೋಷಕರ ತಿಂಗಳ ವರಮಾನ ೧ ಸಾವಿರ ರೂ. ಗಿಂತ ಹೆಚ್ಚಿರಬಾರದು.

ಪ್ರತಿಭೆಯ ಆಧಾರದ ಮೇಲೆ ನೀಡುವ ಈ ವಿದ್ಯಾರ್ಥಿ ವೇತನವನ್ನು ೮ ನೇ ತರಗತಿಯಿಂದ ಹಿಡಿದು ಎಲ್ಲ ರೀತಿಯ ವ್ಯಾಸಂಗಕ್ಕೆ ತಿಂಗಳಿಗೆ ೫೦ ರಿಂದ ಹಿಡಿದು ೨೫೦ರೂ ವರೆಗೆ ಕೊಡಲಾಗುತ್ತದೆ.

ಹೆಚ್ಚಿನ ವಿವರ ಮತ್ತು ಅರ್ಜಿ ಫಾರಂಗಳನ್ನು ಕಾರ್ಮಿಕ ಇಲಾಖೆಯ ಯಾವುದೇ ಕಛೇರಿಯಿಂದ ಅಥವಾ ಈ ಕೆಳಗಿನ ವಿಳಾಸದಿಂದ ಪಡೆಯಬಹುದು. ಅರ್ಜಿ ಸ್ವೀಕರಿಸುವ ಕೊನೇ ದಿನಾಂಕ: **30–11–1984.**

ವೆಲ್‌ಫೇರ್ ಕಮಿಶನರ್, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ, ವಿ ಐ ಎಸ್ ಎಲ್ ಕಟ್ಟಡ, ಜೆ.ಸಿ. ರಸ್ತೆ, ಬೆಂಗಳೂರು.

### ಪಂಪ್ ಸೆಟ್‌ಗೆ ವಿದ್ಯುತ್ ಸಂಪರ್ಕಕ್ಕೆ ಆಗ್ರಹ

ಶೃಂಗೇರಿ: ಇಲ್ಲಿಗೆ ಸಮೀಪದ ಕಿಗ್ಗದ ಬಳಿಯ ಅಮ್ಮೂರಿನ ಅಣ್ಣಪ್ಪ ಹೆಗ್ಡೆ ಎಂಬವರಿಗೆ ಪಂಪ್ ಸೆಟ್‌ಗೆ ವಿದ್ಯುತ್ ಸಂಪರ್ಕ ಮಂಜೂರಾಗಿ ಒಂದು ವರ್ಷದ ಮೇಲಾಗಿದ್ದರೂ ಇನ್ನೂ ಸಂಪರ್ಕ ಕೊಟ್ಟಿಲ್ಲವೆಂದು ದೂರಿತ್ತಿದ್ದಾರೆ. ಐದಾರು ಕಂಬಗಳು ಮಾತ್ರ ಬೇಕಾಗಲಿದ್ದು, ಇದರಿಂದ ಇನ್ನೂ ಹಲವರಿಗೆ ಉಪಯೋಗವಾಗಲಿದೆಯೆಂದು ಅವರು ತಿಳಿಸಿ, ಇದಕ್ಕಾಗಿ ಬಾಳೆಹೊನ್ನೂರು, ಚಿಕ್ಕಮಗಳೂರು ಅಂತ ಅಲೆದು ಸುಸ್ತಾಗಿ ಶಾಸಕರಿಗೂ ೨–೩ ಸಲ ದೂರು ನೀಡಿದರೂ ಸಂಪರ್ಕ ಸಿಗದೆ, ಈಗ ಕೈಗೆ ಬಂದ ಪೈರು ಒಣಗುತ್ತಿದೆ ಎಂದಿದ್ದಾರೆ. ಬಾಳೆಹೊನ್ನೂರಿನ ಅಧಿಕಾರಿ ದುಗ್ಗಪ್ಪ ಗೌಡರು ಬಹಳ ಸಲ ಅಲೆದಾಡಿಸಿ ಕಡೆಗೆ, "ಕೆಲಸ ಮಾಡುವವರು ಯಾರೂ ಇಲ್ಲ. ನೀವೇ ಯಾರನ್ನಾದರೂ ಹಿಡಿದು ಕೆಲಸ ಮಾಡಿಸಿ. ಆಮೇಲೆ ದುಡ್ಡು ಕೊಡುತ್ತೇವೆ" ಎಂದರು. ಆದರೆ ಒಬ್ಬ ಬಡ ರೈತ ಇದನ್ನು ಮಾಡಿಸಲು ಸಾಧ್ಯವೆ? ಎಂದಿದ್ದಾರೆ.

ಇದರ ಜೊತೆಗೆ ಬ್ಯಾಂಕಿನ ೧೦ ಸಾವಿರ ರೂ. ಸಾಲಕ್ಕೆ ಬಡ್ಡಿ ಕಟ್ಟುವ ನೋಟೀಸು ಬೇರೆ ಬಂದಿದ್ದು, ಇಲಾಖೆಯವರು ಈಗಲಾದರೂ ತುರ್ತು ಕೆಲಸ ನಡೆಸಿ, ಪೈರು ಉಳಿಸಿಕೊಡಬೇಕೆಂದು ಒತ್ತಾಯಿಸಿದ್ದಾರೆ.

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೩ನೇ ವರ್ಷ ೧೨ನೇ ಸಂಚಿಕೆ ಕೊಪ್ಪ ೧೧-೧೧-೧೯೮೪ ಭಾನುವಾರ ಬೆಲೆ ೨೦ ಪೈಸೆ


## ಭದ್ರಾ ಮೇಲ್ದಂಡೆ ವಿರೋಧಿ ಧರಣಿ ನ. ೧೭ಕ್ಕೆ

ಚಿಕ್ಕಮಗಳೂರು: ಭದ್ರಾ ಮೇಲ್ದಂಡೆ ಯೋಜನೆಯನ್ನು ವಿರೋಧಿಸಿ ನ. ೭ರಂದು ಜಿಲ್ಲಾಧಿಕಾರಿ ಕಚೇರಿಯೆದುರು ನಡೆಸಲು ಯೋಜಿಸಲಾಗಿದ್ದ ಧರಣಿಯನ್ನು ನ. ೧೭ರ ಶನಿವಾರ ನಡೆಸಲು ನಿರ್ಧರಿಸಲಾಗಿದೆ. ಧರಣಿ ಅಂದು ಬೆಳಿಗ್ಗೆ ೧೧ ಗಂಟೆಯಿಂದ ನಡೆಯುತ್ತದೆ.

ಜಿಲ್ಲೆಯ ಎಲ್ಲಾ ಕಡೆಗಳಿಂದಲೂ ರೈತರು, ಪ್ರಗತಿಪರರು ಇದರಲ್ಲಿ ಭಾಗವಹಿಸಬೇಕೆಂದು ಯೋಜನೆಯ ವಿರೋಧಿಗಳ ಒಕ್ಕೂಟ ಕರೆ ನೀಡಿದೆ.

**ಕಾಫಿ ಬೆಳೆಗಾರರ ಸಂಘದ ಹೇಳಿಕೆ**

ಯೋಜನೆಯನ್ನು ವಿರೋಧಿಸಿರುವ ಖಾಂಡ್ಯ ಕಾಫಿ ಬೆಳೆಗಾರರ ಸಂಘದ ಅಧ್ಯಕ್ಷ ಉದಯಕುಮಾರ್ ಹೆಗ್ಡೆ ಮತ್ತು ಕಾರ್ಯದರ್ಶಿ ವಿಶ್ವನಾಥ್, ಪಶ್ಚಿಮ ಘಟ್ಟಗಳಲ್ಲಿ ದಟ್ಟ ಹಸಿರಿನ ಕಾಡುಗಳು ಮರೆಯಾಗುತ್ತಿರುವ ಈ ಸಮಯದಲ್ಲಿ ಭದ್ರಾ ಮೇಲ್ದಂಡೆ ಯೋಜನೆಯಿಂದ ಅಳಿದುಳಿದ ಹಸಿರೂ ನಾಶಿಹೋಗಬಹುದು ಎಂದಿದ್ದಾರೆ.

ಈ ಯೋಜನೆಯಿಂದ ಅಡಿಕೆ, ಕಾಫಿ ತೋಟಗಳ ಮುಳುಗಡೆಯ ಜೊತೆಗೆ ಸಾವಿರಾರು ಎಕರೆ ಅರಣ್ಯ ನಾಶವಾಗಲಿದ್ದು, ಇದರ ಪರಿಣಾಮವಾಗಿ ಹವಾಮಾನದಲ್ಲಿ ತೀವ್ರ ಏರುಪೇರಾಗಲಿದ್ದು, ನದಿಯ ಮೂಲಗಳೂ ಬತ್ತಿಹೋಗುವ ಅಪಾಯವಿರುವುದಲ್ಲದೆ, ಇದರಿಂದ ಮಲೆನಾಡು ಮುಂದೆ ಮರಳುಗಾಡಾಗಬಹುದು ಎಂದು ಅವರು ಎಚ್ಚರಿಸಿದ್ದಾರೆ.

ಮಾಗುಂಡಿಯಿಂದ ಕೆಲವೇ ಕಿ. ಮೀ. ದೂರದಲ್ಲಿ ಇನ್ನೊಂದು ಜಲಾಶಯ ಈಗಾಗಲೇ ಇದೆ. ಈ ಎಲ್ಲ ಸಾಧಕ–ಬಾಧಕಗಳನ್ನೂ ವಿವೇಚಿಸಿ ಈ ಯೋಜನೆಯನ್ನು ಕೈಬಿಡಬೇಕೆಂದು ಅವರು ಒತ್ತಾಯಿಸಿದ್ದಾರೆ.

## ಕಾರ್ಮಿಕರ ಮಕ್ಕಳಿಗೆ ವಿದ್ಯಾರ್ಥಿ ವೇತನ

ಬೆಂಗಳೂರು: ೧೯೮೪-೮೫ ರ ಸಾಲಿಗೆ ರಾಜ್ಯದ ಅರ್ಹರಾದ ಕಾರ್ಮಿಕರ ಮಕ್ಕಳಿಂದ ವಿದ್ಯಾರ್ಥಿವೇತನದ ಅರ್ಜಿಗಳನ್ನು ಕರೆಯಲಾಗಿದೆ. ಅರ್ಜಿದಾರ ವಿದ್ಯಾರ್ಥಿಗಳು ತಮ್ಮ ಹಿಂದಿನ ಪರೀಕ್ಷೆಯಲ್ಲಿ ಶೇ ೫೦ ಅಂಕ ಪಡೆದಿರಬೇಕು (ಪರಿಶಿಷ್ಟ ಜಾತಿ/ಪಂಗಡಗಳವರಿಗೆ ಶೇ. ೪೦); ಬೇರೆ ಯಾವುದೇ ವಿದ್ಯಾರ್ಥಿ ವೇತನ ಪಡೆಯಿರಬಾರದು; ಪೋಷಕರ ತಿಂಗಳ ವರಮಾನ ೧ ಸಾವಿರ ರೂ. ಗಿಂತ ಹೆಚ್ಚಿರಬಾರದು.

ಪ್ರತಿಭೆಯ ಆಧಾರದ ಮೇಲೆ ನೀಡುವ ಈ ವಿದ್ಯಾರ್ಥಿ ವೇತನವನ್ನು ೮ ನೇ ತರಗತಿಯಿಂದ ಹಿಡಿದು ಎಲ್ಲ ರೀತಿಯ ವ್ಯಾಸಂಗಕ್ಕೆ ತಿಂಗಳಿಗೆ ೫೦ ರಿಂದ ಹಿಡಿದು ೨೫೦ರೂ ವರೆಗೆ ಕೊಡಲಾಗುತ್ತದೆ.

ಹೆಚ್ಚಿನ ವಿವರ ಮತ್ತು ಅರ್ಜಿ ಫಾರಂಗಳನ್ನು ಕಾರ್ಮಿಕ ಇಲಾಖೆಯ ಯಾವುದೇ ಕಛೇರಿಯಿಂದ ಅಥವಾ ಈ ಕೆಳಗಿನ ವಿಳಾಸದಿಂದ ಪಡೆಯಬಹುದು. ಅರ್ಜಿ ಸ್ವೀಕರಿಸುವ ಕೊನೇ ದಿನಾಂಕ: **30-11-1984.**

ವೆಲ್‌ಫೇರ್ ಕಮಿಶನರ್, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ, ವಿ.ವಿ.ಟವರ್. ಎಲ್. ಕಟ್ಟಡ, ಜೆ.ಸಿ. ರಸ್ತೆ, ಬೆಂಗಳೂರು.

## ಪಂಪ್ ಸೆಟ್‌ಗೆ ವಿದ್ಯುತ್ ಸಂಪರ್ಕಕ್ಕೆ ಆಗ್ರಹ

ಶೃಂಗೇರಿ: ಇಲ್ಲಿಗೆ ಸಮೀಪದ ಕಿಗ್ಗದ ಬಳಿಯ ಅಮ್ಮೂರಿನ ಅಣ್ಣಪ್ಪ ಹೆಗ್ಡೆ ಎಂಬವರಿಗೆ ಪಂಪ್ ಸೆಟ್‌ಗೆ ವಿದ್ಯುತ್ ಸಂಪರ್ಕ ಮಂಜೂರಾಗಿ ಒಂದು ವರ್ಷದ ಮೇಲಾಗಿದ್ದರೂ ಇನ್ನೂ ಸಂಪರ್ಕ ಕೊಟ್ಟಿಲ್ಲವೆಂದು ದೂರಿಕೊಂಡಿದ್ದಾರೆ. ಐದಾರು ಕಂಬಗಳು ಮಾತ್ರ ಬೇಕಾಗಲಿದ್ದು, ಇದರಿಂದ ಇನ್ನೂ ಹಲವರಿಗೆ ಉಪಯೋಗವಾಗಲಿದೆಯೆಂದು ಅವರು ತಿಳಿಸಿ, ಇದಕ್ಕಾಗಿ ಬಾಳೆಹೊನ್ನೂರು, ಚಿಕ್ಕಮಗಳೂರು ಅಂತ ಅಲೆದು ಸುಸ್ತಾಗಿ ಶಾಸಕರಿಗೂ ೨-೩ ಸಲ ದೂರು ನೀಡಿದರೂ ಸಂಪರ್ಕ ಸಿಗದೆ, ಈಗ ಕೈಗೆ ಬಂದ ಪೈರು ಒಣಗುತ್ತಿದೆ ಎಂದಿದ್ದಾರೆ. ಬಾಳೆಹೊನ್ನೂರಿನ ಅಧಿಕಾರಿ ದುಗ್ಗಪ್ಪ ಗೌಡರು ಬಹಳ ಸಲ ಅಲೆದಾಡಿಸಿ ಕಡೆಗೆ, "ಕೆಲಸ ಮಾಡುವವರು ಯಾರೂ ಇಲ್ಲ. ನೀವೇ ಯಾರನ್ನಾದರೂ ಹಿಡಿದು ಕೆಲಸ ಮಾಡಿಸಿ. ಆಮೇಲೆ ದುಡ್ಡು ಕೊಡುತ್ತೇವೆ" ಎಂದರು. ಆದರೆ ಒಬ್ಬ ಬಡ ರೈತ ಇದನ್ನು ಮಾಡಿಸಲು ಸಾಧ್ಯವೇ? ಎಂದಿದ್ದಾರೆ.

ಇದರ ಜೊತೆಗೆ ಬ್ಯಾಂಕಿನ ೧೦ ಸಾವಿರ ರೂ. ಸಾಲಕ್ಕೆ ಬಡ್ಡಿ ಕಟ್ಟುವ ನೋಟೀಸು ಬೇರೆ ಬಂದಿದ್ದು, ಇಲಾಖೆಯವರು ಈಗಲಾದರೂ ತುರ್ತು ಕೆಲಸ ನಡೆಸಿ, ಪೈರು ಉಳಿಸಿಕೊಡಬೇಕೆಂದು ಒತ್ತಾಯಿಸಿದ್ದಾರೆ.

## ಇಂದಿರಾ ನಿಧನಕ್ಕೆ ಎಲ್ಲೆಡೆ ಕಂಬನಿ

ಕೊಪ್ಪ: ದಿ|| ಪ್ರಧಾನಿ ಇಂದಿರಾ ಗಾಂಧಿಯವರ ನಿಧನದ ಬಗ್ಗೆ ಶೋಕ ಸೂಚಕ ಸಭೆಗಳು ನಡೆದ ವರದಿಗಳು ಎಲ್ಲೆಡೆಯಿಂದ ಬರುತ್ತಿವೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಚಿಕ್ಕಮಗಳೂರು ಜಿಲ್ಲಾ ಶಾಖೆ ಕಚೇರಿಯಲ್ಲ ನಡೆದ ಸಭೆಯಲ್ಲಿ ಅಗಲಿದ ಪ್ರಧಾನಿಗೆ ಸಂತಾಪ ವ್ಯಕ್ತಪಡಿಸ, ಅವರ ಹತ್ಯೆ ಅಮಾನವೀಯ ಕೃತ್ಯವೆಂದು ಉಗ್ರವಾಗಿ ಖಂಡಿಸಲಾಯಿತು.

ಜಾತಿ–ಮತೀಯ ಸಣ್ಣತನ, ಅಧಿಕಾರದ ಹಂಬಲದಿಂದ ಇಂದೂ ದೇಶಾದ್ಯಂತ ಕೊಲೆ, ಲೂಟಿ, ಅತ್ಯಾಚಾರ, ದೌರ್ಜನ್ಯಗಳು ಅಧಿಕಗೊಳ್ಳುತ್ತಾ ಜನಸಾಮಾನ್ಯರು ಸಾವಿನ ದವಡೆಯಲ್ಲಿ ಬದುಕುವಂತಾಗಿದೆ. ಭಾರತೀಯರು ಜಾತಿ ರಹಿತ, ವರ್ಗರಹಿತ, ಸಮಾನತೆಯ ಸಮಾಜ ಸ್ಥಾಪನೆಗಾಗಿ ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗಿದೆ ಎಂದು ದ.ಸಂ.ಸ. ಕರೆ ನೀಡಿದೆ.

ಬಾಳೆಹೊನ್ನೂರಿನಲ್ಲಿ ಎಲ್ಲ ರಾಜಕೀಯ ಪಕ್ಷಗಳವರು, ವಿವಿಧ ಜನವರ್ಗಗಳವರು ಮತ್ತು ಸುತ್ತಮುತ್ತಲ ಹಳ್ಳಿಗಳ ಜನತೆ ಅಪಾರ ಸಂಖ್ಯೆಯಲ್ಲಿ ಸೇರಿ ಅ. ೩೧ರಂದು ಸಂತಾಪ ಸೂಚಕ ಸಭೆ ನಡೆಸಿದರು. ನ. ೩ ರಂದು ಮೌನಾಚರಣೆ ಮತ್ತು ಮೌನ ಮೆರವಣಿಗೆ ನಡೆಯಿತು.

ಗುಡ್ಡೇತೋಟ, ಹಾಲ್ಮತ್ತೂರಿನ ಹುಲುಕೋಡು ಶಾಲೆ, ಸೀತೂರು ವಿನಾಯಕ ರೈತಸಂಘ ಮುಂತಾದೆಡೆಗಳಿಂದಲೂ ಸಂತಾಪ ಸೂಚಕ ಸಭೆಗಳು ನಡೆದ ವರದಿಗಳು ಬಂದಿವೆ.

### ಶಿವಮೊಗ್ಗ ಅಡಿಕೆ ಪೇಟೆ

ತಾರೀಕು: ೭-೧೧-'೮೪

ಸರಕು: ೨೪೬೦ ರಿಂದ ೩೩೪೯

ಬೆಟ್ಟೆ: ೧೨೦೦ ರಿಂದ ೨೦೬೦

ಗೊರಬಲು: ೭೨೯ರಿಂದ ೧೦೭೯

## ಕೊಪ್ಪ ತಾ|| ಶಾಲಾ ಕ್ರೀಡಾ ಕೂಟ

ಕೊಪ್ಪ: ಇಲ್ಲಿನ ಕ್ರೀಡಾಭಿವೃದ್ಧಿ ಸಮಿತಿಯ ಆಶ್ರಯದಲ್ಲಿ ಮಕ್ಕಳ ದಿನಾಚರಣೆಯಂಗವಾಗಿ ನ. ೧೪ರಂದು ಬೆಳಿಗ್ಗೆ ೯-೩೦ಕ್ಕೆ ತಾ|| ಮಟ್ಟದ ಶಾಲಾ ಮಕ್ಕಳ ಕ್ರೀಡಾಸ್ಪರ್ಧೆಗಳು ನಡೆಯುತ್ತಿವೆ. ಶಿಶುವಿಹಾರದಿಂದ ಪ್ರೌಢಶಾಲಾ ಮಕ್ಕಳವರೆಗೆಲ್ಲ ಹಂತಗಳಲ್ಲಿ ಸ್ಪರ್ಧೆಗಳು ನಡೆಯುತ್ತವೆ.

ತಾಲ್ಲೂಕಿನ ಎಲ್ಲಾ ಶಿಶುವಿಹಾರ, ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳು ಹಾಗೂ ಪ್ರೌಢಶಾಲೆಗಳ ಮುಖ್ಯಸ್ಥರು ತಮ್ಮ ಶಾಲೆಗಳ ಮಕ್ಕಳನ್ನು ಈ ಸ್ಪರ್ಧೆಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸಬೇಕಾಗಿ ಸಮಿತಿ ಕೋರಿದೆ.

ಪ್ರೌಢಶಾಲಾ ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗಾಗಿ **ರಸ್ತೆ ಓಟದ ಸ್ಪರ್ಧೆ** ನ. ೧೪ರ ಬೆಳಿಗ್ಗೆ ೮ ಗಂಟೆಗೆ ಆರಂಭವಾಗುತ್ತದೆ. ಸ್ಪರ್ಧಿಗಳು ವೈದ್ಯರಿಂದ ಪಡೆದ ಅರ್ಹತಾ ಪತ್ರದೊಂದಿಗೆ ಶಂಕರ್ ಕಂಪೆನಿಯ ಎದುರುಗಡೆ ವ್ಯವಸ್ಥಾಪಕರಲ್ಲಿ ವರದಿ ಮಾಡಿಕೊಳ್ಳಬೇಕು.

ಆಯಾ ಕ್ಷೇತ್ರಮಟ್ಟದಲ್ಲಿ ವಿಜೇತರಾಗಿ ತಾ|| ಮಟ್ಟಕ್ಕೆ ಸ್ಪರ್ಧಿಸುತ್ತಿರುವವರ ಮತ್ತು ಪ್ರೌಢಶಾಲಾ ಸ್ಪರ್ಧಾಳುಗಳ ಪ್ರವೇಶವನ್ನು ತಾ|| ೧೨-೧೧-೮೪ ರೊಳಗಾಗಿ ಹೆಚ್.ಎ.ಗೋಪಾಲ್, ದೈಹಿಕ ಶಿಕ್ಷಣ ಶಿಕ್ಷಕರು, ಕಿರಿಯ ಕಾಲೇಜು, ಕೊಪ್ಪ—ಈ ವಿಳಾಸಕ್ಕೆ ಕಳುಹಿಸಬೇಕು.

## ಓದುಗರ ಪತ್ರಗಳು

### "ರಸ್ತೆ ಕಾಮಗಾರಿ ರದ್ದು ಮಾಡಬೇಡಿ"

ಮಾನ್ಯರೆ,

ಗವಿಕಲ್ಲು ಗಣಪತಿ ಕಟ್ಟೆಯಿಂದ ಬೋಳಾಪುರದ ಮಾರ್ಗವಾಗಿ ಜೊಮ್ಲಾಪುರಕ್ಕೆ ಸೇರುವ ಲೋಕೋಪಯೋಗಿ ರಸ್ತೆಯ ಬಡಾವಣೆ, ಮೋರಿ ಕಟ್ಟುವುದು, ಟಾರು ಹಾಕುವುದು ಮುಂತಾದ ಕಾಮಗಾರಿಗಾಗಿ ೩ ಲಕ್ಷ ರೂ. ಯೋಜನೆ ಮಂಜೂರಾಗಿರುವುದಾಗಿ ತಿಳಿದು ಬಂದಿತ್ತು. ಆದರೆ ಈಗ ಅದನ್ನು ರದ್ದು ಮಾಡಿ, ಅದೇ ಹಣವನ್ನು ಕಾಚಕಲ್ ರಸ್ತೆಗೆ ವಿನಿಯೋಗಿಸಲಾಗುತ್ತಿದೆಯೆಂದು ಗೊತ್ತಾಗಿದೆ.

ಇದು ನಿಜವಿದ್ದಲ್ಲಿ, ತೀರ ಹಿಂದುಳಿದ ನಮ್ಮ ಗ್ರಾಮದ ಅಭಿವೃದ್ಧಿಗೆ ಅಪಾರ ಸಹಾಯ ಮಾಡಲಿದ್ದ ಈ ಯೋಜನೆಯನ್ನು ರದ್ದು ಮಾಡಬಾರದಾಗಿ ಸಂಬಂಧಪಟ್ಟವರಲ್ಲಿ ಕೋರುತ್ತೇವೆ.

**ಮಂಜಯ್ಯ ಶೆಟ್ಟಿ,**
**ಕೆ. ಎ. ಶಂಕರಪ್ಪ,**
ಜೊಮ್ಲಾಪುರ.

### "ಕ್ರಮಬದ್ಧ"

ಈ ಮೇಲ್ಕಂಡ ಪತ್ರದ ಬಗ್ಗೆ ಕೊಪ್ಪ ಲೋಕೋಪಯೋಗಿ ಇಲಾಖೆ ಕಚೇರಿಯಲ್ಲಿ ವಿಚಾರಿಸಿದಾಗ ತಿಳಿದು ಬಂದ ವಿವರ ಹೀಗಿದೆ:

ಪತ್ರದಲ್ಲಿ ತಿಳಿಸಿರುವಂಥ ರಸ್ತೆಯೊಂದು ಕೇಂದ್ರ ಸರ್ಕಾರದ "ಕನಿಷ್ಠ ಅಗತ್ಯಗಳ ಯೋಜನೆ" (ಎಂ.ಎನ್.ಪಿ.) ಯಲ್ಲಿ ಬೋಳಾಪುರಕ್ಕೆಂದು ಮಂಜೂರಾಗಿತ್ತು. ಈ ಯೋಜನೆಯ ನಿಬಂಧನೆಗಳೆಂದರೆ, ಆ ಹಳ್ಳಿಯ ಜನಸಂಖ್ಯೆ ೧೫೦೦ ಕ್ಕಿಂತ ಹೆಚ್ಚಿಗೆ ಇರಬೇಕು ಹಾಗೂ ಅಲ್ಲಿಗೆ ಬೇರಾವುದೇ ರಸ್ತೆ ಇರಬಾರದು (ಕನಿಷ್ಠ ಲೋಕೋಪಯೋಗಿ ರಸ್ತೆಯಂತೂ ಇರಬಾರದು.)

ಯೋಜನೆಯ ಹಣ ಕೇಂದ್ರ ಸರಕಾರದ್ದಾದರೂ, ಕೆಲಸದ ನಿರ್ವಹಣೆ ಲೋ॥ ಇಲಾಖೆಯದೇ. ಕೆಲಸ ನಿರ್ವಹಿಸುವ ಮೊದಲು ನಿಬಂಧನೆಗಳಿಗೆ ತಕ್ಕಂತಿದೆಯೇ ಎಂಬುದನ್ನು ಪರಿಶೀಲಿಸಿ ಮುಂದುವರಿಯಲು ಸ್ಥಳೀಯ ಅಧಿಕಾರಿಗಳಿಗೆ ನಿರ್ದೇಶಿಸಲಾಗುತ್ತದೆ.

ಬೋಳಾಪುರಕ್ಕೆ ಹೊಕ್ಕಳಿಕೆಯಿಂದ ಕೇಂದ್ರ ಸರ್ಕಾರದ ಐ.ಸಿ.ಆರ್.ಸಿ. ಯೋಜನೆಯ ರಸ್ತೆ ಹಾಗೂ ಜೊಮ್ಲಾಪುರದಿಂದ ಇದೇ ಕ.ಅ. ಯೋಜನೆಯ ರಸ್ತೆ ಈಗಾಗಲೇ ಆಗಿದ್ದು, ಅವು ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೇ ಒಳಪಟ್ಟಿವೆ. ಆದ್ದರಿಂದ ಹೊಸ ಯೋಜನೆಗಾಗಿ ನಿಬಂಧನೆ ಪರಿಶೀಲಿಸುವಾಗ ಈ ವಿವರ ವರದಿಮಾಡಿದ್ದಕ್ಕೆ ಕಾಮಗಾರಿ ರದ್ದುಮಾಡುವಂತೆ ಆದೇಶಬಂತು.

ಯೋಜನೆಯೊಂದು ಮಂಜೂರಾಗುವುದೇ ಕಷ್ಟ. ಆಗಿದ್ದನ್ನು ಕಳೆದುಕೊಳ್ಳುವುದೇಕೆಂದು, ಬೋಳಾಪುರದ ರಸ್ತೆಗೆ ಬದಲಿಯಾಗಿ "ಕೊಪ್ಪ ಗ್ರಾಮಾಂತರ ರಸ್ತೆ"ಯನ್ನು ಸೂಚಿಸಿದಾಗ ಅದಕ್ಕೆ ಮಂಜೂರಾತಿ ದೊರೆತಿದೆ. ಈ ರಸ್ತೆ ಕೊಪ್ಪದ ಭಾರತ್ ಅಕ್ಕಿ ಗಿರಣಿಯಿಂದ ಕಾಚಕಲ್ ಮಾರ್ಗವಾಗಿ ಕೊಪ್ಪ-ಕಳಸಾಪುರ-ತೆಂಗಿನಮನೆ ರಸ್ತೆಯ ೪ ನೇ ಕಿ. ಮೀ. ನಲ್ಲಿ ಸಂಧಿಸುತ್ತದೆ.

### "ಗ್ರಾಮಸೇವಕರಿಗೆ ತರಬೇತಿ ಸಾಲದು"

ಮಾನ್ಯರೆ,

ರಾಜ್ಯದ ಪ್ರತಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಗ್ರಾಮ ಸೇವಕರಿದ್ದು ಇವರು ರೈತರ ಅಗತ್ಯಗಳನ್ನು ಪೂರೈಸುವಲ್ಲಿ ಯಶಸ್ವಿ ಆಗಿಲ್ಲವೆಂದರೆ ತಪ್ಪಾಗುವುದಿಲ್ಲ. ಇದಕ್ಕೆ ಸರಕಾರವೇ ನೇರಹೊಣೆ ಎನ್ನಬಹುದು. ಅತ್ಯಗತ್ಯ ಹುದ್ದೆಯೊಂದಕ್ಕೆ ಆರಿಸಿ ಬರುವ ಈ ನೌಕರ ಹುದ್ದೆಗೆ ತಕ್ಕ ತರಬೇತಿ ಪಡೆದ ಹಾಗೂ ವಾತಾವರಣಕ್ಕೆ ಹೊಂದಿಕೆ ಆಗಬಲ್ಲ ಸಲಹೆಗಾರ ಆಗಿಲ್ಲ.

ಅತಿಯಾದ ಮಳೆಯಿಂದ ದಿನೇ ದಿನೇ ಸತ್ವಹೀನವಾಗುತ್ತಿರುವ ಮಲೆನಾಡಿನ ನೆಲ ಇಂದು ರಾಸಾಯನಿಕ ಗೊಬ್ಬರಗಳ ಅನಿಯತ ಬಳಕೆಯಿಂದ ಬಂಜರಾಗುತ್ತಿದೆ. ಇದು ರೈತನ ಗಮನಕ್ಕೆ ಬರುವಷ್ಟರಲ್ಲಿ ಸರಿಪಡಿಸಲಾಗದಷ್ಟು ಹದಗೆಟ್ಟಿರುತ್ತದೆ.

ಉತ್ಪಾದನೆ ಹೆಚ್ಚಿಸುವುದೊಂದೇ ಸರಕಾರದ ಗುರಿ ಆಗಿದ್ದರೆ, ಮಾನವನ ಏಳಿಗೆಗೆ ರಾಸಾಯನಿಕ ಗೊಬ್ಬರ ಮತ್ತು ಕೀಟನಾಶಕಗಳೇ ಸಾಕು. ಆದರೆ **ಹಾಗೆ ಮಾಡಲು ನೆಲ ಎನ್ನುವುದು ಹಂಚಿನ ಅಥವಾ ಕಬ್ಬಿಣದ ಕಾರ್ಖಾನೆ ಅಲ್ಲ.** ಶಾಶ್ವತವಾಗಿ ಮಣ್ಣು ತನ್ನ ಸತ್ವ ಉಳಿಸಿಕೊಂಡು ಹೋಗಬಲ್ಲ, ರೋಗ ನಿರೋಧಕ ಶಕ್ತಿ ಉಳಿಸಿಕೊಳ್ಳಬಲ್ಲ ಹಟ್ಟಿ ಗೊಬ್ಬರದ ಬಳಕೆ ಕಡಿಮೆ ಆಗುತ್ತಿದೆ. ಹಾಗೂ ಅದೇ ಪ್ರಮಾಣದಲ್ಲಿ ರಾಸಾಯನಿಕಗಳ ಬಳಕೆ ಹೆಚ್ಚುತ್ತಿದೆ ಈ ಬಗ್ಗೆ ಸರಕಾರ, ರೈತ ಜನತೆ ಹಾಗೂ ಅತ್ಯಗತ್ಯ ಹುದ್ದೆಯೊಂದರಲ್ಲಿರುವ ಗ್ರಾಮ ಸೇವಕರು ಗಮನ ಹರಿಸಬೇಕು. **ನಾಲ್ಕು ವರ್ಷ ಬೆಳೆತೆಗೆದು ಪರದೇಶಕ್ಕೆ ತೆರಳುವವರಂತೆ ವರ್ತಿಸುವ ನಾಗಾಲೋಟ ಅನಾರೋಗ್ಯಕರ ಬೆಳವಣಿಗೆ.** ಇದನ್ನು ಎಲ್ಲರೂ ಗಂಭೀರವಾಗಿ ಯೋಚಿಸಬೇಕು.

**—ಮೊಗ ಜಗದೀಶ್.**

## ಉದ್ಯೋಗ ವಾರ್ತೆ

ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಕಂಪ್ಯೂಟರ್ ಸೆಂಟರ್‌ನಲ್ಲಿ **ಕಂಪ್ಯೂಟರ್ ಆಪರೇಟರ್ ಟ್ರೈನಿ** ಗಳ ೮ ಸ್ಥಾನಗಳಿಗೆ ಅರ್ಜಿ ಕರೆದಿದ್ದಾರೆ. ಅರ್ಹತೆಗಳು: ಭೌತಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳೊಡನೆ ವಿಜ್ಞಾನದಲ್ಲಿ ಕನಿಷ್ಠ ಮೊದಲನೆ ದರ್ಜೆಯ ಬ್ಯಾಚೆಲರ್ಸ್ ಪದವಿ **ಅಥವಾ ಎಲೆಕ್ಟ್ರಾನಿಕ್ಸ್/ಎಲೆಕ್ಟ್ರಿಕಲ್ ಇಂ**ಜಿನಿಯರಿಂಗ್‌ನಲ್ಲಿ (ಎಸ್ಸೆಸ್ಸೆಲ್ಸಿ ತೇರ್ಗಡೆಯ ನಂತರ) ಮೂರುವರ್ಷಗಳ ಡಿಪ್ಲೊಮಾದಲ್ಲಿ ಕನಿಷ್ಠ ಪ್ರಥಮ ದರ್ಜೆಯ ತೇರ್ಗಡೆ.

ತರಬೇತಿಯ ಅವಧಿ—ಒಂದು ವರ್ಷ. ಸ್ಟೈಪಂಡ್—ತಿಂಗಳಿಗೆ ೮೦೦ ರೂ.

ನಿಗದಿತ ಅರ್ಜಿ ಫಾರಂಗಳನ್ನು ಸೆಕ್ಯುರಿಟಿ ಆಫೀಸರ್‌ರಿಂದ ಖುದ್ದಾಗಿ ಅಥವಾ ಸ್ವವಿಳಾಸ ಬರೆದ, ಅಂಚೆ ಚೀಟಿ ಹಚ್ಚಿದ ಲಕೋಟೆ ಕಳಿಸಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳಜೊತೆ ಪ್ರಮಾಣ ಪತ್ರಗಳು, ಅರ್ಹತಾ ಪತ್ರಗಳು ಇತ್ಯಾದಿಗಳ ಪ್ರತಿಗಳನ್ನು ಲಗತ್ತಿಸಿರಬೇಕು. ಅರ್ಜಿಗಳನ್ನು **೨೮-೧೧-೧೯೮೪** ರೊಳಗೆ ರಿಜಿಸ್ಟ್ರಾರ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು-೧೨, ಇವರಿಗೆ ತಲುಪಿಸಬೇಕು. ವಿವರಗಳಿಗೆ **೭—೧೧—೮೪ ರ 'ಪ್ರಜಾವಾಣಿ' ನೋಡಿ.**

### ತಾ.ವ್ಯ.ಮಾ.ಸ.ನಿ. ಅಕ್ಕಿ ಗಿರಣಿ: "ವ್ಯಾಪಾರಿಗಳಿಗೆ ಪ್ರತ್ಯೇಕ ದಿನ ಕಾರ್ಯಸಾಧ್ಯವಲ್ಲ"

ಕೊಪ್ಪ: ಇಲ್ಲಿನ ತಾ.ವ್ಯ.ಮಾ.ಸ.ನಿ. ಅಕ್ಕಿಗಿರಣಿಯಲ್ಲಿ ವ್ಯಾಪಾರಿಗಳು ಬಹು ದೊಡ್ಡ ಪ್ರಮಾಣದಲ್ಲಿ ಅಕ್ಕಿ ಮಾಡಿಸುತ್ತ ರೈತರಿಗೆ ತೊಂದರೆಯಾಗುವುದರಿಂದ ರೈತರಿಗೆ ಮತ್ತು ವ್ಯಾಪಾರಿಗಳಿಗೆ ಬೇರೆ ಬೇರೆ ದಿನಗಳನ್ನು ನಿಗದಿಮಾಡಬೇಕೆಂದು ಈಚೆಗೆ ಬಂದಿದ್ದ ಒತ್ತಾಯದ ಬಗ್ಗೆ ತಾ.ವ್ಯ.ಮಾ.ಸ.ನಿ. ಮೂಲಗಳು ತಮ್ಮ ಅಸಹಾಯಕತೆ ವ್ಯಕ್ತಪಡಿಸಿವೆ.

ಗಿರಣಿಯಲ್ಲಿ ರೈತರು, ವ್ಯಾಪಾರಿಗಳೆಂದು ಗಿರಾಕಿಗಳನ್ನು ಗುರುತು ಮಾಡುವುದು ಕಾರ್ಯಸಾಧ್ಯವಲ್ಲ. ತಹಸೀಲ್ದಾರರು ಅಥವಾ ಇಂಥ ಯಾರಾದರೂ ಅಧಿಕಾರಿಗಳು ವ್ಯಾಪಾರಿ ಉದ್ದೇಶಕ್ಕೆ ಅಕ್ಕಿ ಮಾಡಿಸುವವರ ಪಟ್ಟಿ ಪ್ರಕಟಿಸಿದರೆ ಮಾತ್ರ ಇದರ ಕ್ರಮ ಕೈಗೊಳ್ಳಬಹುದು ಎಂದು ಆ ಮೂಲಗಳು ಹೇಳಿವೆ.

ಆದರೂ ಗಿರಣಿಯಲ್ಲಿ ಯಾರಿಗೂ ಒಂದು ಸಲಕ್ಕೆ ೩೦ ಕ್ವಿಂಟಾಲಿಂತ ಹೆಚ್ಚು ಭತ್ತ ಮಿಲ್ ಮಾಡಿಸಲು (ಮೂರು ಗಂಟೆ ಅವಧಿ) ಅವಕಾಶ ಕೊಡುತ್ತಿಲ್ಲ. ಅಲ್ಲದೆ ಗಿರಾಕಿಗಳು ಗಿರಣಿಗೆ ಬಂದ ಹಾಗೆ ಟೋಕನ್ ಚೀಟಿ ನೀಡಿ, ಅದೇ ಕ್ರಮದಲ್ಲಿ ಅಕ್ಕಿ ಮಾಡಿಕೊಡಲಾಗುತ್ತಿದೆ ಎಂದೂ ಆ ಮೂಲಗಳ ಹೇಳಿಕೆ.

## 'ಚೈತನ್ಯ' ಯೋಜನೆ: ಹಿಂದುಳಿದವರಿಗೆ ನೆರವು

ಚಿಕ್ಕಮಗಳೂರು: ವಾರ್ಷಿಕ ಆದಾಯ ೬ ಸಾವಿರಕ್ಕಿಂತ ಕಡಿಮೆ ಇರುವ ಹಿಂದುಳಿದ ಪಂಗಡ, ಹಿಂದುಳಿದ ಜಾತಿ, ಹಿಂದುಳಿದ ಬುಡಕಟ್ಟುಗಳವರಿಗೆ ಹಾಗೂ ಅಲ್ಪ ಸಂಖ್ಯಾತರಿಗೆ ಸರ್ಕಾರದ ಚೈತನ್ಯ ಯೋಜನೆಯಡಿ ವಿವಿಧ ಉದ್ಯಮಕ್ಕಾಗಿ ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ಶೇ. ೪ ಬಡ್ಡಿ ದರದಲ್ಲಿ ಸಾಲಗಳನ್ನು ಕೊಡಿಸಲಾಗುವುದು. ರೂ. ೫ ಸಾವಿರದೊಳಗಿನ ಸಾಲವಾದರೆ ಅದರಲ್ಲಿ ಅರ್ಧ ಭಾಗ, ೫ ರಿಂದ ೧೦ ಸಾವಿರದ ವರೆಗಾದರೆ ಶೇ. ೩೦ ಭಾಗ ಮತ್ತು ೧೦ ಸಾವಿರಕ್ಕಿಂತ ಹೆಚ್ಚಾದಲ್ಲಿ ಶೇ. ೨೦ ಭಾಗ ಹಣವನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಸಹಾಯಧನವಾಗಿ ಕೊಡುತ್ತದೆ. (ಉಳಿದ ಭಾಗ ಮಾತ್ರ ಶೇ. ೪ ರ ಸಾಲ)

ಈ ಸಾಲಕ್ಕಾಗಿ ನಿಗದಿತವಾದ ಅರ್ಜಿ ಫಾರಂಗಳನ್ನು ಆಯಾ ಕ್ಷೇತ್ರಾಭಿವೃದ್ಧಿ ಅಧಿಕಾರಿ ಕಛೇರಿಗಳಿಂದ ಪಡೆಯಬಹುದು ಅಥವಾ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಅಧಿಕಾರಿಗಳ ಕಚೇರಿ, ಜೋಸನುನೆ ರಸ್ತೆ, ಚಿಕ್ಕಮಗಳೂರು – ಈ ವಿಳಾಸಕ್ಕೆ ೧ ರೂ. ಮನಿಆರ್ಡರ್ ಮಾಡಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆ ಗಳೊಂದಿಗೆ ಇದೇ ವಿಳಾಸಕ್ಕೆ ಕಳಿಸಬೇಕು. ಹೆಚ್ಚಿನ ವಿವರಗಳನ್ನು ಇಲ್ಲಿಂದಲೇ ಪಡೆಯಬಹುದು.

### ರೈತ ಸಂಘದವರಿಂದ ರೈತರಿಗೆ ಕಛೇರಿ ಕೆಲಸಗಳಲ್ಲಿ ಸಹಾಯ

ಕೊಪ್ಪ: ರಾಜ್ಯ ರೈತ ಸಂಘದ ಕೊಪ್ಪ ಶಾಖೆಯ ೫ ಜನರ ಸಮಿತಿಯೊಂದರ ಸದಸ್ಯರು ಪ್ರತೀ ಸೋಮವಾರ ಬೆಳಗಿನಿಂದ ಸಂಜೆಯವರೆಗೆ ತಾ॥ ಕಛೇರಿಯಲ್ಲಿ ಹಾಜರಿದ್ದು, ರೈತರ ಕೆಲಸಗಳನ್ನು ಮಾಡಿಸಿ ಕೊಳ್ಳಲು ನೆರವಾಗುವರು. ಹಾಗೆಯೇ ಪ್ರತಿ ಗುರುವಾರ ಜಯಪುರದಲ್ಲಿ ಮೇಗುಂದಾ ಹೋಬಳಿ ದಿನ ನಡೆಯುತ್ತಿದ್ದು, ಆ ದಿನ ಹೋಬಳಿ ಪದಾಧಿಕಾರಿಗಳು ಬೆಳಗಿಂದ ಸಂಜೆಯ ವರೆಗೆ ಅಲ್ಲಿ ಹಾಜರಿದ್ದು ರೈತರ ಕೆಲಸಗಳಿಗೆ ನೆರವಾಗುವರು. ರೈತರು ಈ ವ್ಯವಸ್ಥೆಯ ಪ್ರಯೋಜನ ಪಡೆಯಬೇಕೆಂಬುದಾಗಿ ರೈತ ಸಂಘದ ಪ್ರಕಟಣೆ ತಿಳಿಸಿದೆ.

### ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಮುಂದಕ್ಕೆ

ಚಿಕ್ಕಮಗಳೂರು: ಜಿಲ್ಲಾ ಲೇಖಕರ ಸಂಘದ ಆಶ್ರಯದಲ್ಲಿ ನವೆಂಬರ್ ೧೦ ಮತ್ತು ೧೧ ರಂದು ಸಂಯೋಜಿಸಿದ್ದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಅನಿವಾರ್ಯ ಕಾರಣಗಳಿಂದ ಮುಂದೂಡಲಾಗಿದ್ದು, ಡಿಸೆಂಬರ್ ೮ ಮತ್ತು ೯ ರಂದು ನಡೆಸಲು ತೀರ್ಮಾನಿಸಲಾಗಿದೆ. ಸಮ್ಮೇಳನದ ಪ್ರತಿನಿಧಿ ಶುಲ್ಕ ೧೦ ರೂ. ಗಳನ್ನು ಬಿ. ಎನ್. ಜ್ವಾಲನಪ್ಪ, ಕೆ.ಜಿ.ಐ.ಡಿ, ೬೧೮, ಕೋಟೆ, ಅಗ್ರಹಾರ, ಚಿಕ್ಕಮಗಳೂರು—ಈ ವಿಳಾಸಕ್ಕೆ ಮನಿಆರ್ಡರ್ ಮೂಲಕ ಕಳಿಸಲು ಕೋರಲಾಗಿದೆ.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅವರಿಗಾಗಿ ... ಶ್ರೀವಿಷ್ಣು ಮುದ್ರಣಾಲಯ, ಕೊಪ್ಪ. ಶೃಂಗೇರಿ ಪ್ರತಿನಿಧಿ: ಕಲ್ಕುಳಿ ವಿಠಲ ಹೆಗ್ಡೆ

## ಓದುಗರ ಪತ್ರಗಳು

### "ರಸ್ತೆ ಕಾಮಗಾರಿ ರದ್ದು ಮಾಡಬೇಡಿ"

ಮಾನ್ಯರೆ,

ಗವಿಕಲ್ಲು ಗಣಪತಿ ಕಟ್ಟೆಯಿಂದ ಬೋಳಾಪುರದ ಮಾರ್ಗವಾಗಿ ಬೊಮ್ಲಾಪುರಕ್ಕೆ ಸೇರುವ ಲೋಕೋಪಯೋಗಿ ರಸ್ತೆಯ ಬಡಾವಣೆ, ಮೋರಿ ಕಟ್ಟುವುದು, ಟಾರು ಹಾಕುವುದು ಮುಂತಾದ ಕಾಮಗಾರಿಗಾಗಿ ೩ ಲಕ್ಷ ರೂ. ಯೋಜನೆ ಮಂಜೂರಾಗಿರುವುದಾಗಿ ತಿಳಿದು ಬಂದಿತ್ತು. ಆದರೆ ಈಗ ಅದನ್ನು ರದ್ದು ಮಾಡಿ, ಅದೇ ಹಣವನ್ನು ಕಾಚಕಲ್ ರಸ್ತೆಗೆ ವಿನಿಯೋಗಿಸಲಾಗುತ್ತಿದೆ ಯೆಂದು ಗೊತ್ತಾಗಿದೆ.

ಇದು ನಿಜವಿದ್ದಲ್ಲಿ, ತೀರ ಹಿಂದುಳಿದ ನಮ್ಮ ಗ್ರಾಮದ ಅಭಿವೃದ್ಧಿಗೆ ಅಪಾರ ಸಹಾಯ ಮಾಡಲಿದ್ದ ಈ ಯೋಜನೆಯನ್ನು ರದ್ದು ಮಾಡಬಾರದಾಗಿ ಸಂಬಂಧಪಟ್ಟವರಲ್ಲಿ ಕೋರುತ್ತೇವೆ.

ಮಂಜಯ್ಯ ಶೆಟ್ಟಿ,<br>
ಕೆ. ಎ. ಶಂಕರಪ್ಪ,<br>
ಬೊಮ್ಲಾಪುರ.

### "ಕ್ರಮಬದ್ಧ"

ಈ ಮೇಲ್ಕಂಡ ಪತ್ರದ ಬಗ್ಗೆ ಕೊಪ್ಪ ಲೋಕೋಪಯೋಗಿ ಇಲಾಖೆ ಕಚೇರಿಯಲ್ಲಿ ವಿಚಾರಿಸಿದಾಗ ತಿಳಿದು ಬಂದ ವಿವರ ಹೀಗಿದೆ:

ಪತ್ರದಲ್ಲಿ ತಿಳಿಸಿರುವಂಥ ರಸ್ತೆಯೊಂದು ಕೇಂದ್ರ ಸರ್ಕಾರದ "ಕನಿಷ್ಠ ಅಗತ್ಯಗಳ ಯೋಜನೆ" (ಎಂ.ಎನ್.ಪಿ.) ಯಲ್ಲಿ ಬೋಳಾಪುರಕ್ಕೆಂದು ಮಂಜೂರಾಗಿತ್ತು. ಈ ಯೋಜನೆಯ ನಿಬಂಧನೆಗಳೆಂದರೆ, ಆ ಹಳ್ಳಿಯ ಜನಸಂಖ್ಯೆ ೧೫೦೦ ಕ್ಕಿಂತ ಹೆಚ್ಚಿಗೆ ಇರಬೇಕು ಹಾಗೂ ಅಲ್ಲಿಗೆ ಬೇರಾವುದೇ ರಸ್ತೆ ಇರಬಾರದು (ಕನಿಷ್ಠ ಲೋಕೋಪಯೋಗಿ ರಸ್ತೆಯಂತೂ ಇರಬಾರದು.)

ಯೋಜನೆಯ ಹಣ ಕೇಂದ್ರ ಸರಕಾರದ್ದಾದರೂ, ಕೆಲಸದ ನಿರ್ವಹಣೆ ಲೋ|| ಇಲಾಖೆಯದೇ. ಕೆಲಸ ನಿರ್ವಹಿಸುವ ಮೊದಲು ನಿಬಂಧನೆಗಳಿಗೆ ತಕ್ಕಂತಿದೆಯೇ ಎಂಬುದನ್ನು ಪರಿಶೀಲಿಸಿ ಮುಂದುವರಿಯಲು ಸ್ಥಳೀಯ ಅಧಿಕಾರಿಗಳಿಗೆ ನಿರ್ದೇಶಿಸಲಾಗುತ್ತದೆ

ಬೋಳಾಪುರಕ್ಕೆ ಹೊಕ್ಕಳಿಕೆಯಿಂದ ಕೇಂದ್ರ ಸರ್ಕಾರದ ಐ.ಸಿ.ಆರ್.ಸಿ. ಯೋಜನೆಯ ರಸ್ತೆ ಹಾಗೂ ಬೊಮ್ಲಾಪುರದಿಂದ ಇದೇ ಕ.ಅ. ಯೋಜನೆಯ ರಸ್ತೆ ಈಗಾಗಲೇ ಆಗಿದ್ದು, ಅವು ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೇ ಒಳಪಟ್ಟವೆ. ಆದ್ದರಿಂದ ಹೊಸ ಯೋಜನೆಗಾಗಿ ನಿಬಂಧನೆ ಪರಿಶೀಲಿಸುವಾಗ ಈ ವಿವರ ವರದಿಮಾಡಿದ್ದಕ್ಕೆ ಕಾಮಗಾರಿ ರದ್ದುಮಾಡುವಂತೆ ಆದೇಶಬಂತು.

ಯೋಜನೆಯೊಂದು ಮಂಜೂರಾಗುವುದೇ ಕಷ್ಟ. ಆಗಿದ್ದನ್ನು ಕಳೆದುಕೊಳ್ಳುವುದೇಕೆಂದು, ಬೋಳಾಪುರದ ರಸ್ತೆಗೆ ಬದಲಿಯಾಗಿ "ಕೊಪ್ಪ ಗ್ರಾಮಾಂತರ ರಸ್ತೆ"ಯನ್ನು ಸೂಚಿಸಿದಾಗ ಅದಕ್ಕೆ ಮಂಜೂರಾತಿ ದೊರೆತಿದೆ. ಈ ರಸ್ತೆ ಕೊಪ್ಪದ ಭಾರತ್ ಅಕ್ಕಿ ಗಿರಣಿಯಿಂದ ಕಾಚಕಲ್ ಮಾರ್ಗವಾಗಿ ಕೊಪ್ಪ-ಕಳಸಾಪುರ–ತೆಂಗಿನಮನೆ ರಸ್ತೆಯ ೪ ನೇ ಕಿ. ಮೀ. ನಲ್ಲಿ ಸಂಧಿಸುತ್ತದೆ.

### "ಗ್ರಾಮಸೇವಕರಿಗೆ ತರಬೇತಿ ಸಾಲದು"

ಮಾನ್ಯರೆ,

ರಾಜ್ಯದ ಪ್ರತಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಗ್ರಾಮ ಸೇವಕರಿದ್ದು ಇವರು ರೈತರ ಅಗತ್ಯಗಳನ್ನು ಪೂರೈಸುವಲ್ಲಿ ಯಶಸ್ವಿ ಆಗಿಲ್ಲವೆಂದರೆ ತಪ್ಪಾಗುವುದಿಲ್ಲ. ಇದಕ್ಕೆ ಸರಕಾರವೇ ನೇರಹೊಣೆ ಎನ್ನಬಹುದು. ಅತ್ಯಗತ್ಯ ಹುದ್ದೆಯೊಂದಕ್ಕೆ ಆರಿಸಿ ಬರುವ ಈ ನೌಕರ ಹುದ್ದೆಗೆ ತಕ್ಕ ತರಬೇತಿ ಪಡೆದ ಹಾಗೂ ವಾತಾವರಣಕ್ಕೆ ಹೊಂದಿಕೆ ಆಗಬಲ್ಲ ಸಲಹೆಗಾರ ಆಗಿಲ್ಲ.

ಅತಿಯಾದ ಮಳೆಯಿಂದ ದಿನೇ ದಿನೇ ಸತ್ವಹೀನವಾಗುತ್ತಿರುವ ಮಲೆನಾಡಿನ ನೆಲ ಇಂದು ರಾಸಾಯನಿಕ ಗೊಬ್ಬರಗಳ ಅನಿಯತ ಬಳಕೆಯಿಂದ ಬಂಜರಾಗುತ್ತಿದೆ. ಇದು ರೈತನ ಗಮನಕ್ಕೆ ಬರುವಷ್ಟರಲ್ಲಿ ಸರಿಪಡಿಸಲಾಗದಷ್ಟು ಹದಗೆಟ್ಟಿರುತ್ತದೆ.

ಉತ್ಪಾದನೆ ಹೆಚ್ಚಿಸುವುದೊಂದೇ ಸರಕಾರದ ಗುರಿ ಆಗಿದ್ದರೆ, ಮಾನವನ ಏಳಿಗೆಗೆ ರಾಸಾಯನಿಕ ಗೊಬ್ಬರ ಮತ್ತು ಕೀಟನಾಶಕಗಳೇ ಸಾಕು. ಆದರೆ **ಹಾಗೆ ಮಾಡಲು ನೆಲ ಎನ್ನುವುದು ಹಂಚಿನ ಅಥವಾ ಕಬ್ಬಿಣದ ಕಾರ್ಖಾನೆ ಅಲ್ಲ**. ಶಾಶ್ವತವಾಗಿ ಮಣ್ಣು ತನ್ನ ಸತ್ವ ಉಳಿಸಿಕೊಂಡು ಹೋಗಬಲ್ಲ, ರೋಗ ನಿರೋಧಕ ಶಕ್ತಿ ಉಳಿಸಿಕೊಳ್ಳಬಲ್ಲ ಹಟ್ಟಿ ಗೊಬ್ಬರದ ಬಳಕೆ ಕಡಿಮೆ ಆಗುತ್ತಿದೆ. ಹಾಗೂ ಅದೇ ಪ್ರಮಾಣದಲ್ಲಿ ರಾಸಾಯನಿಕಗಳ ಬಳಕೆ ಹೆಚ್ಚುತ್ತಿದೆ ಈ ಬಗ್ಗೆ ಸರಕಾರ, ರೈತ ಜನತೆ ಹಾಗೂ ಅತ್ಯಗತ್ಯ ಹುದ್ದೆಯೊಂದರಲ್ಲಿರುವ ಗ್ರಾಮ ಸೇವಕರು ಗಮನ ಹರಿಸಬೇಕು. **ನಾಲ್ಕು ವರ್ಷ ಬೆಳೆತೆಗೆದು ಪರದೇಶಕ್ಕೆ ತೆರಳುವವರಂತೆ ವರ್ತಿಸುವ ನಾಗಾಲೋಟ ಅನಾರೋಗ್ಯಕರ ಬೆಳವಣಿಗೆ.** ಇದನ್ನು ಎಲ್ಲರೂ ಗಂಭೀರವಾಗಿ ಯೋಚಿಸಬೇಕು.

—ಮೂಗ ಜಗದೀಶ್.

## ಉದ್ಯೋಗ ವಾರ್ತೆ

ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಕಂಪ್ಯೂಟರ್ ಸೆಂಟರ್‌ನಲ್ಲಿ **ಕಂಪ್ಯೂಟರ್ ಆಪರೇಟರ್ ಟ್ರೈನಿ** ಗಳ ೮ ಸ್ಥಾನಗಳಿಗೆ ಅರ್ಜಿ ಕರೆದಿದ್ದಾರೆ. ಅರ್ಹತೆಗಳು: ಭೌತಶಾಸ್ತ್ರ ಮತ್ತು ಗಣಿತ ಶಾಸ್ತ್ರಗಳೊಡನೆ ವಿಜ್ಞಾನದಲ್ಲಿ ಕನಿಷ್ಠ ಮೊದಲನೆ ದರ್ಜೆಯ ಬ್ಯಾಚೆಲರ್ಸ್ ಪದವಿ **ಅಥವಾ** ಎಲೆಕ್ಟ್ರಾನಿಕ್ಸ್/ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ (ಎಸ್ಸೆಸ್ಸೆಲ್ಸಿ ತೇರ್ಗಡೆಯ ನಂತರ) ಮೂರುವರ್ಷಗಳ ಡಿಪ್ಲೊಮಾದಲ್ಲಿ ಕನಿಷ್ಠ ಪ್ರಥಮ ದರ್ಜೆಯ ತೇರ್ಗಡೆ.

ತರಬೇತಿಯ ಅವಧಿ—ಒಂದು ವರ್ಷ. ಸ್ಟೈಪೆಂಡ್–ತಿಂಗಳಿಗೆ ೮೦೦ ರೂ.

ನಿಗದಿತ ಅರ್ಜಿ ಫಾರಂಗಳನ್ನು ಸೆಕ್ಯುರಿಟಿ ಆಫೀಸರ್‌ರಿಂದ ಖುದ್ದಾಗಿ ಅಥವಾ ಸ್ವವಿಳಾಸ ಬರೆದ, ಅಂಚೆ ಚೀಟಿ ಹಚ್ಚಿದ ಲಕೋಟೆ ಕಳಿಸಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳಜೊತೆ ಪ್ರಮಾಣ ಪತ್ರಗಳು, ಅರ್ಹತಾ ಪತ್ರಗಳು ಇತ್ಯಾದಿಗಳ ಪ್ರತಿಗಳನ್ನು ಲಗತ್ತಿಸಿರಬೇಕು. ಅರ್ಜಿಗಳನ್ನು **೨೮-೧೧-೧೯೮೪** ರೊಳಗೆ ರಿಜಿಸ್ಟ್ರಾರ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು–೧೨, ಇವರಿಗೆ ತಲುಪಿಸಬೇಕು. ವಿವರಗಳಿಗೆ **೭—೧೧—೮೪** ರ **'ಪ್ರಜಾವಾಣಿ' ನೋಡಿ.**

### ತಾ.ವ್ಯ.ಮಾ.ಸ.ನಿ. ಅಕ್ಕಿ ಗಿರಣಿ: "ವ್ಯಾಪಾರಿಗಳಿಗೆ ಪ್ರತ್ಯೇಕ ದಿನ ಕಾರ್ಯಸಾಧ್ಯವಲ್ಲ"

ಕೊಪ್ಪ: ಇಲ್ಲಿನ ತಾ.ವ್ಯ.ಮಾ.ಸ.ನಿ. ಅಕ್ಕಿಗಿರಣಿಯಲ್ಲಿ ವ್ಯಾಪಾರಿಗಳು ಬಹು ದೊಡ್ಡ ಪ್ರಮಾಣದಲ್ಲಿ ಅಕ್ಕಿ ಮಾಡಿಸುತ್ತ ರೈತರಿಗೆ ತೊಂದರೆಯಾಗುವುದರಿಂದ ರೈತರಿಗೆ ಮತ್ತು ವ್ಯಾಪಾರಿಗಳಿಗೆ ಬೇರೆ ಬೇರೆ ದಿನಗಳನ್ನು ನಿಗದಿಮಾಡಬೇಕೆಂದು ಈಚೆಗೆ ಬಂದಿದ್ದ ಒತ್ತಾಯದ ಬಗ್ಗೆ ತಾ.ವ್ಯ.ಮಾ.ಸ.ನಿ. ಮೂಲಗಳು ತಮ್ಮ ಅಸಹಾಯಕತೆ ವ್ಯಕ್ತಪಡಿಸಿವೆ.

ಗಿರಣಿಯಲ್ಲಿ ರೈತರು, ವ್ಯಾಪಾರಿಗಳು ಎಂದು ಗಿರಾಕಿಗಳನ್ನು ಗುರುತು ಮಾಡುವುದು ಕಾರ್ಯಸಾಧ್ಯವಲ್ಲ. ತಹಸೀಲ್ದಾರರು ಅಥವಾ ಇಂಥ ಯಾರಾದರೂ ಅಧಿಕಾರಿಗಳು ವ್ಯಾಪಾರೀ ಉದ್ದೇಶಕ್ಕೆ ಅಕ್ಕಿ ಮಾಡಿಸುವವರ ಪಟ್ಟಿ ಪ್ರಕಟಿಸಿದರೆ ಮಾತ್ರ ಇದರಂತೆ ಕ್ರಮ ಕೈಗೊಳ್ಳಬಹುದು ಎಂದು ಆ ಮೂಲಗಳು ಹೇಳಿವೆ.

ಆದರೂ ಗಿರಣಿಯಲ್ಲಿ ಯಾರಿಗೂ ಒಂದು ಸಲಕ್ಕೆ ೩೦ ಕ್ವಿಂಟಾಲ್‌ಗಿಂತ ಹೆಚ್ಚು ಭತ್ತ ಮಿಲ್ ಮಾಡಿಸಲು (ಮೂರು ಗಂಟೆ ಅವಧಿ) ಅವಕಾಶ ಕೊಡುತ್ತಿಲ್ಲ. ಅಲ್ಲದೆ ಗಿರಾಕಿಗಳು ಗಿರಣಿಗೆ ಬಂದ ಹಾಗೆ ತೂಕದ ಚೀಟಿ ನೀಡಿ, ಅದೇ ಕ್ರಮದಲ್ಲಿ ಅಕ್ಕಿ ಮಾಡಿಕೊಡಲಾಗುತ್ತಿದೆ ಎಂದೂ ಆ ಮೂಲಗಳ ಹೇಳಿಕೆ.

### 'ಚೈತನ್ಯ' ಯೋಜನೆ: ಹಿಂದುಳಿದವರಿಗೆ ನೆರವು

ಚಿಕ್ಕಮಗಳೂರು: ವಾರ್ಷಿಕ ಆದಾಯ ೬ ಸಾವಿರಕ್ಕಿಂತ ಕಡಿಮೆ ಇರುವ ಹಿಂದುಳಿದ ಪಂಗಡ, ಹಿಂದುಳಿದ ಜಾತಿ, ಹಿಂದುಳಿದ ಬುಡಕಟ್ಟುಗಳವರಿಗೆ ಹಾಗೂ ಅಲ್ಪ ಸಂಖ್ಯಾತರಿಗೆ ಸರ್ಕಾರದ ಚೈತನ್ಯ ಯೋಜನೆಯಡಿ ವಿವಿಧ ಉದ್ಯಮಕ್ಕಾಗಿ ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ಶೇ. ೪ ಬಡ್ಡಿ ದರದಲ್ಲಿ ಸಾಲಗಳನ್ನು ಕೊಡಿಸಲಾಗುವುದು. ರೂ. ೫ ಸಾವಿರದೊಳಗಿನ ಸಾಲವಾದರೆ ಅದರಲ್ಲಿ ಅರ್ಧ ಭಾಗ, ೫ ರಿಂದ ೧೦ ಸಾವಿರದ ವರೆಗಾದರೆ ಶೇ. ೩೦ ಭಾಗ ಮತ್ತು ೧೦ ಸಾವಿರಕ್ಕಿಂತ ಹೆಚ್ಚಾದಲ್ಲಿ ಶೇ. ೨೦ ಭಾಗ ಹಣವನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಸಹಾಯಧನವಾಗಿ ಕೊಡುತ್ತದೆ. (ಉಳಿದ ಭಾಗ ಮಾತ್ರ ಶೇ. ೪ ರ ಸಾಲ)

ಈ ಸಾಲಕ್ಕಾಗಿ ನಿಗದಿತವಾದ ಅರ್ಜಿ ಫಾರಂಗಳನ್ನು ಆಯಾ ಕ್ಷೇತ್ರಾಭಿವೃದ್ಧಿ ಅಧಿಕಾರಿ ಕಛೇರಿಗಳಿಂದ ಪಡೆಯಬಹುದು ಅಥವಾ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಅಧಿಕಾರಿಗಳ ಕಚೇರಿ, ಹೊಸಮನೆ ರಸ್ತೆ, ಚಿಕ್ಕಮಗಳೂರು – ಈ ವಿಳಾಸಕ್ಕೆ ೧ ರೂ. ಮನಿಆರ್ಡರ್ ಮಾಡಿ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆ ಗಳೊಂದಿಗೆ ಇದೇ ವಿಳಾಸಕ್ಕೆ ಕಳಿಸಬೇಕು. ಹೆಚ್ಚಿನ ವಿವರಗಳನ್ನು ಇಲ್ಲಿಂದಲೇ ಪಡೆಯಬಹುದು.

### ರೈತ ಸಂಘದವರಿಂದ ರೈತರಿಗೆ ಕಛೇರಿ ಕೆಲಸಗಳಲ್ಲಿ ಸಹಾಯ

ಕೊಪ್ಪ: ರಾಜ್ಯ ರೈತ ಸಂಘದ ಕೊಪ್ಪ ಶಾಖೆಯ ೫ ಜನರ ಸಮಿತಿಯೊಂದರ ಸದಸ್ಯರು ಪ್ರತೀ ಸೋಮವಾರ ಬೆಳಗಿನಿಂದ ಸಂಜೆಯವರೆಗೆ ತಾ|| ಕಛೇರಿಯಲ್ಲಿ ಹಾಜರಿದ್ದು, ರೈತರ ಕೆಲಸಗಳನ್ನು ಮಾಡಿಸಿ ಕೊಳ್ಳಲು ನೆರವಾಗುವರು. ಹಾಗೆಯೇ ಪ್ರತಿ ಗುರುವಾರ ಜಯಪುರದಲ್ಲಿ ಮೇಗುಂದಾ ಹೋಬಳಿ ದಿನ ನಡೆಯುತ್ತಿದ್ದು, ಆ ದಿನ ಹೋಬಳಿ ಪದಾಧಿಕಾರಿಗಳು ಬೆಳಗಿಂದ ಸಂಜೆಯ ವರೆಗೆ ಅಲ್ಲಿ ಹಾಜರಿದ್ದು ರೈತರ ಕೆಲಸಗಳಿಗೆ ನೆರವಾಗುವರು. ರೈತರು ಈ ವ್ಯವಸ್ಥೆಯ ಪ್ರಯೋಜನ ಪಡೆಯಬೇಕೆಂಬುದಾಗಿ ರೈತ ಸಂಘದ ಪ್ರಕಟಣೆ ತಿಳಿಸಿದೆ.

### ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಮುಂದಕ್ಕೆ

ಚಿಕ್ಕಮಗಳೂರು: ಜಿಲ್ಲಾ ಲೇಖಕರ ಸಂಘದ ಆಶ್ರಯದಲ್ಲಿ ನವೆಂಬರ್ ೧೦ ಮತ್ತು ೧೧ ರಂದು ಸಂಯೋಜಿಸಿದ್ದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಅನಿವಾರ್ಯ ಕಾರಣಗಳಿಂದ ಮುಂದೂಡಲಾಗಿದ್ದು, ಡಿಸೆಂಬರ್ ೮ ಮತ್ತು ೯ ರಂದು ನಡೆಸಲು ತೀರ್ಮಾನಿಸಲಾಗಿದೆ. ಸಮ್ಮೇಳನದ ಪ್ರತಿನಿಧಿ ಶುಲ್ಕ ೧೦ ರೂ. ಗಳನ್ನು ಬಿ. ಎನ್. ಜ್ವಾಲನಪ್ಪ, ಕೆ.ಜಿ.ಐ.ಡಿ, ೬೧೮, ಕೋಟೆ, ಅಗ್ರಹಾರ, ಚಿಕ್ಕಮಗಳೂರು–ಈ ವಿಳಾಸಕ್ಕೆ ಮನಿಆರ್ಡರ್ ಮೂಲಕ ಕಳಿಸಲು ಕೋರಲಾಗಿದೆ.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಶಿವಮನೆ ನಾಗರಾಜ್, ಆ[illegible] ನಿವಾಸಿಗೆ ಅಚ್ಚುಕೂಟ, ಕೊಪ್ಪ. ಶೃಂಗೇರಿ ಪ್ರತಿನಿಧಿ: ಕಲ್ಕುಳಿ ವಿಠಲ ಹೆಗ್ಡೆ